# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1053
ಸದಸ್ಯರ ಹೆಸರು : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.03.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯ ತಾಲ್ಲೂಕುಗಳಿಗೆ ಮಂಜೂರಾತಿಯಾಗಿರುವ ಮಿನಿ ವಿಧಾನಸೌಧಗಳೆಷ್ಟು; ಅವು ಯಾವುವು; ಅವುಗಳಲ್ಲಿ ನಿರ್ಮಾಣಗೊಂಡಿರುವ ನಿರ್ಮಾಣಕ್ಕೆ ಬಾಕಿಯಿರುವ ಮಿನಿ ವಿಧಾನಗಳೆಷ್ಟು; ಅವು ಯಾವುದು; ನಿರ್ಮಾಣಗೊಂಡ ಮಿನಿ ವಿಧಾನಸೌಧ ಯಾವಾಗ ಉದ್ಘಾಟನೆಯಗಿದೆ; ಯಾವಾಗ ಹಸ್ತಾಂತರವಾಗಿದೆ; ಈ ಕಟ್ಟಡಗಳ ನಿರ್ಮಾಣ ವೆಚ್ಚ ಎಷ್ಟು ಹಾಗೂ ಗುತ್ತಿಗೆದಾರರು ಯಾರು; (ತಾಲ್ಲೂಕುವಾರು ಕಟ್ಟಡವಾರು ಮಾಹಿತಿ ನೀಡುವುದು) | • ಉಡುಪಿ ಜಿಲ್ಲೆಯ 7 ತಾಲ್ಲೂಕುಗಳಿಗೆ ಮಿನಿ ವಿಧಾನಸೌಧ ಮಂಜೂರಾಗಿರುತ್ತದೆ. ಉಡುಪಿ, ಕುಂದಾಪುರ, ಕಾರ್ಕಳ, ಬ್ರಹ್ಮಾವರ, ಬೈಂದೂರು, ಕಾಪು ಮತ್ತು ಹೆಬ್ರಿ.<br>• ಉಡುಪಿ, ಕುಂದಾಪುರ ಮತ್ತು ಕಾರ್ಕಳ ಮಿನಿ ವಿಧಾನ ಸೌಧ ಕಟ್ಟಡಗಳು ನಿರ್ಮಾಣಗೊಂಡಿರುತ್ತವೆ.<br>• ಹೆಬ್ರಿ, ಬೈಂದೂರು, ಕಾಪು ಮತ್ತು ಬ್ರಹ್ಮಾವರ ತಾಲೂಕು ಮಿನಿ ವಿಧಾನ ಸೌಧ ಕಟ್ಟಡಗಳು ನಿರ್ಮಾಣಕ್ಕೆ ಬಾಕಿ ಇರುತ್ತದೆ.<br>• ಉಡುಪಿ ತಾಲೂಕು ಮಿನಿ ವಿಧಾನ ಸೌಧ ಕಟ್ಟಡವು ದಿನಾಂಕ:08.01.2020 ರಂದು ಉದ್ಘಾಟನೆಗೊಂಡಿದ್ದು, ದಿನಾಂಕ:27.08.2019 ರಂದು ಕಂದಾಯ ಇಲಾಖೆಗೆ ಹಸ್ತಾಂತರವಾಗಿರುತ್ತದೆ. ಸದರಿ ಮಿನಿ ವಿಧಾನಸೌಧ ಕಟ್ಟಡದ ನಿರ್ಮಾಣ ವೆಚ್ಚ ರೂ.10.00 ಕೋಟಿಯಾಗಿದ್ದು, ಮೆ॥ದೇವಿಪ್ರಸಾದ್ ಕನ್ಸ್‌ಟ್ರಕ್ಷನ್ಸ್ ಪ್ರೈ.ಲಿ, ಬೆಂಗಳೂರು ಇವರು ಗುತ್ತಿಗೆದಾರರಾಗಿರುತ್ತಾರೆ.<br>• ಕಾರ್ಕಳ ತಾಲೂಕು ಮಿನಿ ವಿಧಾನ ಸೌಧವು 2004 ರಲ್ಲಿ ಉದ್ಘಾಟನೆಯಾಗಿದ್ದು, ದಿನಾಂಕ:12.04.2004 ರಂದು ಹಸ್ತಾಂತರವಾಗಿರುತ್ತದೆ. ಸದರಿ ಮಿನಿ ವಿಧಾನಸೌಧ ಕಟ್ಟಡದ ನಿರ್ಮಾಣ ವೆಚ್ಚ ರೂ.154.54 ಲಕ್ಷಗಳಾಗಿದ್ದು ಶ್ರೀ ರಾಘವೇಂದ್ರ ಆಚಾರ್, ಕಾರ್ಕಳ ಇವರು ಗುತ್ತಿಗೆದಾರರಾಗಿರುತ್ತಾರೆ.<br>• ಕುಂದಾಪುರ ತಾಲೂಕು ಮಿನಿ ವಿಧಾನ ಸೌಧವು ದಿನಾಂಕ:07.02.2015 ರಂದು ಉದ್ಘಾಟನೆಯಾಗಿದ್ದು, ದಿನಾಂಕ:05.02.2015 ರಂದು ಹಸ್ತಾಂತರವಾಗಿರುತ್ತದೆ. ಸದರಿ ಮಿನಿ ವಿಧಾನಸೌಧ ಕಟ್ಟಡದ ನಿರ್ಮಾಣದ ವೆಚ್ಚ ರೂ.490.00 ಲಕ್ಷಗಳಾಗಿದ್ದು, ಮೆ॥ಶೆಟ್ಟಿಸ್ ಕನ್ ಸ್ಟ್ರಕ್ಷನ್ಸ್ ಹುಬ್ಬಳ್ಳಿ ಇವರು ಗುತ್ತಿಗೆದಾರರಾಗಿರುತ್ತಾರೆ. |

.....2

<table>
<tr>
<td>ಆ)</td>
<td>ಉದ್ಘಾಟನೆಯಾದ ಮಿನಿವಿಧಾನ ಸೌಧಗಳಲ್ಲಿ ಯಾವ ಯಾವ ಇಲಾಖೆಗಳು ಕಾರ್ಯನಿರ್ವಹಿಸುತ್ತವೆ; ಅವು ಯಾವುವು; ಬರಲು ಬಾಕಿಯಿರಲು ಇಲಾಖೆಗಳು ಯಾವುವು;</td>
<td>ಸದರಿ ಮಿನಿ ವಿಧಾನಸೌಧಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖೆಗಳ ವಿವರ ಈ ಕೆಳಗಿನಂತಿದೆ.
<table>
<tr><th>ಕ್ರ. ಸಂ.</th><th>ಉದ್ಘಾಟನೆ ಯಾದ ಮಿನಿ ವಿಧಾನ ಸೌಧಗಳ ವಿವರ</th><th>ಮಿನಿವಿಧಾನ ಸೌಧದಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖೆಯ ವಿವರ</th></tr>
<tr><td>1</td><td>ಕಾರ್ಕಳ</td><td>ಕಂದಾಯ ಇಲಾಖೆಯ ವ್ಯಾಪ್ತಿಯ ತಾಲೂಕು ಕಛೇರಿ, ಕಂದಾಯ ನಿರೀಕ್ಷಕರು ಕಾರ್ಕಳ ಹೋಬಳಿ ರವರ ಕಛೇರಿ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಕಛೇರಿ, ಭೂಮಾಪನ ಮತ್ತು ಭೂ ದಾಖಲೆಗಳ ಇಲಾಖೆ ಕಛೇರಿ , ಉಪಖಜಾನೆ ಕಛೇರಿ, ಉಪನೋಂದಣಾಧಿಕಾರಿಯವರ ಕಛೇರಿ ಉಪನೋಂದಣಾಧಿಕಾರಿ ಕಛೇರಿ , ಉಪಖಜಾನೆ ಕಛೇರಿ</td></tr>
<tr><td>2</td><td>ಕುಂದಾಪುರ</td><td>ಕಂದಾಯ ಇಲಾಖೆಯ ವ್ಯಾಪ್ತಿಯ ಸಹಾಯಕ ಕಮೀಷನರ್ ಕಛೇರಿ, ತಾಲೂಕು ಕಛೇರಿ, ಆಹಾರ ಶಾಖೆ,</td></tr>
<tr><td>3</td><td>ಉಡುಪಿ</td><td>ಕಂದಾಯ ಇಲಾಖೆಯ ವ್ಯಾಪ್ತಿಯ ತಾಲೂಕು ಕಛೇರಿ, ಪಡಸಾಲೆ, ಭೂಮಿ ಶಾಖೆ, ಚುನಾವಣಾ ಶಾಖೆ, ಉಪ ನೋಂಧಣಾಧಿಕಾರಿಗಳ ಕಛೇರಿ, ಆಹಾರ ಶಾಖೆ, ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಭೂಮಾಪನ ಶಾಖೆ, ವಿಶೇಷ ಸಹಾಯಕ ಆಯುಕ್ತರ ಕಛೇರಿ, ಭೂನ್ಯಾಯ ಮಂಡಳಿ ಉಡುಪಿ, ಶಾಸಕರ ಕಛೇರಿ</td></tr>
</table>
ಇತರೆ ಇಲಾಖೆಗಳಿಂದ ಕಛೇರಿಗಳಿಗೆ ಸ್ಥಳಾವಕಾಶ ಕೋರಿ ಪ್ರಸ್ತಾವನೆ ಸ್ವೀಕೃತವಾದಲ್ಲಿ, ಅವಶ್ಯಕತೆಗನುಗುಣವಾಗಿ ಸ್ಥಳ ಒದಗಿಸಲಾಗುವುದು.</td>
</tr>
<tr>
<td>ಇ)</td>
<td>ಉಡುಪಿ ಜಿಲ್ಲೆಯ ವಿವಿಧ ಇಲಾಖೆಗಳಿಂದ ಸ್ವಂತ ಕಟ್ಟಡ/ಕಛೇರಿಗೆ ಬೇಡಿಕೆಯಿರುವ ಪ್ರಕರಣಗಳು ಯಾವುವು; ಸಣ್ಣ ನೀರಾವರಿ ಇಲಾಖೆಯಿಂದ ಸ್ವಂತ ಕಟ್ಟಡ/ಕಛೇರಿಗೆ ಬೇಡಿಕೆ ಬಂದಿದೆಯೇ; ಬಂದಿದ್ದಲ್ಲಿ, ನೀಡದೇ ಇರಲು ಕಾರಣವೇನು?</td>
<td>ವಿವಿಧ ಇಲಾಖೆಗಳ ಕಛೇರಿಗಳಿಗೆ ಸ್ವಂತ ಕಟ್ಟಡ ಅವಶ್ಯವಿದ್ದಲ್ಲಿ ಆಯಾ ಇಲಾಖೆಯ ಮುಖ್ಯಸ್ಥರು ಪರಿಶೀಲಿಸಿ ಕ್ರಮವಹಿಸಬೇಕಾಗಿರುತ್ತದೆ.</td>
</tr>
</table>

ಕಂಇ 35 ಡಬ್ಲ್ಯೂಬಿಆರ್ 2021

**(ಆರ್. ಅಶೋಕ)**
ಕಂದಾಯ ಸಚಿವರು